

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 636
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ
ಉತ್ತರಿಸಬೇಕಾದ ದಿನಾಂಕ : 17-12-2021
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕ್ರೈಸ್ಟ್ ವತಿಯಿಂದ ನಡೆಯುತ್ತಿರುವ ವಸತಿ ಶಾಲೆಗಳ ಸಂಖ್ಯೆ ಎಷ್ಟು: (ಜಿಲ್ಲಾವಾರು ಮಾಹಿತಿ ನೀಡುವುದು)</td><td>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದಡಿಯಲ್ಲಿ 503- ಪರಿಶಿಷ್ಟ ಜಾತಿ, 156-ಪರಿಶಿಷ್ಟ ವರ್ಗ, ಹಾಗೂ 167-ಹಿಂದುಳಿದ ವರ್ಗಗಳ ಒಟ್ಟು 826 ವಸತಿ ಶಾಲೆ/ಕಾಲೇಜುಗಳು ಕಾರ್ಯನಿರ್ವಹಿಸುತ್ತಿವೆ. ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಿದೆ.</td></tr>
<tr><td>ಆ)</td><td>ಸದರಿ ಶಾಲೆಗಳಲ್ಲಿ ಮಂಜೂರಾಗಿರುವ ಬೋಧಕ/ಬೋಧಕೇತರ ಹುದ್ದೆಗಳ ಸಂಖ್ಯೆ ಎಷ್ಟು:</td><td>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದಡಿಯಲ್ಲಿನ ವಸತಿ ಶಾಲೆ/ಕಾಲೇಜುಗಳಲ್ಲಿ ಮಂಜೂರಾಗಿರುವ, ಕಾರ್ಯ ನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಕಂಡಂತಿದೆ.
<table>
<tr><th>ಕ್ರ ಸಂ</th><th>ವಿವರ</th><th>ಮಂಜೂರಾದ ಹುದ್ದೆಗಳು</th><th>ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ</th><th>ಖಾಲಿ ಹುದ್ದೆಗಳ ಸಂಖ್ಯೆ</th></tr>
<tr><td>1</td><td>ಬೋಧಕ ಸಿಬ್ಬಂದಿ</td><td>8821</td><td>4724</td><td>4097</td></tr>
<tr><td>2</td><td>ಬೋಧಕೇತರ ಸಿಬ್ಬಂದಿ</td><td>2210</td><td>1077</td><td>1133</td></tr>
<tr><td>3</td><td>ಗ್ರೂಪ್ ಡಿ ನೌಕರರು</td><td>7962</td><td>7884</td><td>78</td></tr>
<tr><td></td><td>ಒಟ್ಟು</td><td>18993</td><td>13685</td><td>5308</td></tr>
</table>
ಖಾಲಿ ಇರುವ 5308 ಹುದ್ದೆಗಳ ಪೈಕಿ 2213 ಅತಿಥಿ ಶಿಕ್ಷಕರು, 1445 ಹೊರ ಸಂಪನ್ಮೂಲ ಬೋಧಕ/ಬೋಧಕೇತರ ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದು, 1650 ಹುದ್ದೆಗಳು ಖಾಲಿ ಇರುತ್ತವೆ.</td></tr>
<tr><td>ಇ)</td><td>ಸದರಿ ಶಾಲೆಗಳಲ್ಲಿ ಖಾಲಿ ಇರುವ ಬೋಧಕ/ ಬೋಧಕೇತರ ಹುದ್ದೆಗಳ ಸಂಖ್ಯೆ ಎಷ್ಟು:</td><td rowspan="2">ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದಡಿಯಲ್ಲಿನ ವಸತಿ ಶಾಲೆಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಅನುಮೋದನೆ ಪಡೆದು ನೇಮಕಾತಿ ಮಾಡಲು ಕ್ರಮವಹಿಸಲಾಗುವುದು.</td></tr>
<tr><td>ಈ)</td><td>ಯಾವ ಕಾಲಮಿತಿಯಲ್ಲಿ ಸದರಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗುವುದು:</td></tr>
</table>

| | | |
|---|---|---|
| ಉ) | ಖಾಯಂ ಸಹ ಶಿಕ್ಷಕರು ಉಪನ್ಯಾಸಕರು ಹಾಗೂ ಪ್ರಾಂಶುಪಾಲರ ಹುದ್ದೆಗಳಿಗೆ ಯಾವ ಕಾಲಮಿತಿಯಲ್ಲಿ ಬಡ್ತಿ ನೀಡಲಾಗುವುದು. | 2011 ಮತ್ತು ನಂತರದ ವಿವಿಧ ಸರ್ಕಾರದ ಆದೇಶಗಳಲ್ಲಿ ಕಾಲಕಾಲಕ್ಕೆ ಸಂಘದ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಆದೇಶಿಸಲಾಗಿರುತ್ತದೆ. ಸಂಘದ ಕೇಂದ್ರ ಕಛೇರಿ ಹಾಗೂ ವಸತಿ ಶಾಲೆ/ಕಾಲೇಜುಗಳಿಗೆ 2011 ರ ನಂತರ ಮಂಜೂರಾಗಿರುವ ಹುದ್ದೆಗಳನ್ನು ಸೇರ್ಪಡೆಗೊಳಿಸಿ, ದಿನಾಂಕ 24.08.2021 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪ್ರಕಟಿಸಲಾಗಿದೆ.<br><br>ಸದರಿ ಕರಡು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸ್ವೀಕೃತವಾಗಿರುವ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪ್ರಕಟಿಸಿದ ನಂತರ ನಿಯಮಾನುಸಾರ ಮುಂಬಡ್ತಿಗೆ ಕ್ರಮವಹಿಸಲಾಗುವುದು.. |
| ಊ) | ಸದರಿ ಸಹ ಶಿಕ್ಷಕರಿಗೆ ಕೆ.ಜಿ.ಐ.ಡಿ, ಡಿ.ಸಿ.ಆರ್.ಜಿ, ಹೆಚ್ಚುವರಿ ವೇತನ ಬಡ್ತಿ ಹಾಗೂ ಇತರೆ ಸೌಲಭ್ಯಗಳನ್ನು ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: (ವಿವರ ನೀಡುವುದು) | ಸರ್ಕಾರಿ ಶಾಲೆಗಳು ಹಾಗೂ ಅಲ್ಪಸಂಖ್ಯಾತ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಬೋಧಕ/ಬೋಧಕೇತರ ನೌಕರರಿಗೆ ಕಾಲಕಾಲಕ್ಕೆ ನಿಗಧಿಪಡಿಸುವ ವೇತನ ಶ್ರೇಣಿ, ತುಟ್ಟಿ ಭತ್ಯೆ, ಮನೆ ಬಾಡಿಗೆ ಭತ್ಯೆ, ವೈದ್ಯಕೀಯ ಭತ್ಯೆ (Medical Allowance ) ಗಳಿಕೆ ರಜೆ ನಗದೀಕರಣ, ವೇತನ ಬಡ್ತಿ ಇತ್ಯಾದಿ ಸೌಲಭ್ಯಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ಕಾಲೇಜುಗಳ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೂ ಸಹ ಪಾವತಿಸಲಾಗುತ್ತಿದೆ. |
| ಋ) | ಸದರಿ ಸೌಲಭ್ಯಗಳನ್ನು ಯಾವ ಕಾಲಮಿತಿಯಲ್ಲಿ ಕಲ್ಪಿಸಲಾಗುವುದು? | **<u>ಕೆ.ಜಿ.ಐ.ಡಿ</u>**<br><br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಸರ್ಕಾರಿ ನೌಕರರಿಗೆ ನೀಡಲಾಗುವ ಕೆ.ಜಿ.ಐ.ಡಿ. ಸೌಲಭ್ಯವನ್ನು ವಿಸ್ತರಿಸುವ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯು ತಿರಸ್ಕರಿಸಿ ಹಿಂಬರಹ ನೀಡಲಾಗಿರುತ್ತದೆ.<br><br>**<u>ಡಿ.ಸಿ.ಆರ್.ಜಿ</u>**<br><br>ವಸತಿ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಖಾಯಂ ನೌಕರರಿಗೆ ಮರಣ ಉಪದಾನ (DCRG) ಸೌಲಭ್ಯ ವಿಸ್ತರಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಪ್ರಸ್ತುತ ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿರುತ್ತದೆ.<br><br>**<u>ಜ್ಯೋತಿ ಸಂಜೀವಿನಿ ಯೋಜನೆ</u>**<br><br>ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಸಂಘದ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸುವ ಸಂಬಂಧ ಷರತ್ತುಗಳಿಗೆ ಒಳಪಟ್ಟು ತಾತ್ವಿಕ ಒಪ್ಪಿಗೆ ನೀಡಿರುತ್ತಾರೆ.<br><br>ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರ ಕೋರಿಕೆಯಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ಕಾಲೇಜುಗಳ ಸಿಬ್ಬಂದಿಗಳು ಮತ್ತು ಅವರ ಅವಲಂಬಿತರ ಹೆಸರು, ವಯಸ್ಸು, ಆಧಾರ್ ಸಂಖ್ಯೆ, Bio metric finger impression/IRIS, ವಿಳಾಸ ಇತ್ಯಾದಿ ವಿವರಗಳನ್ನು ಸಂಘದ ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ |

| | | |
|---|---|---|
| | | ನಮೂದಿಸಲು ಸಂಘದ ಎಲ್ಲಾ ವಸತಿ ಶಾಲೆ/ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಸೂಚಿಸಲಾಗಿರುತ್ತದೆ.<br><br>ಆದರೆ ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ಮೇಲ್ಕಂಡ ಮಾಹಿತಿಗಳನ್ನು ನಮೂದಿಸಲು ತಾಂತ್ರಿಕ ತೊಂದರೆಗಳು ಇರುವುದಾಗಿ ವಸತಿ ಶಾಲೆಗಳ ಪ್ರಾಂಶುಪಾಲರು ತಿಳಿಸಿರುತ್ತಾರೆ. ಈ ಹಿನ್ನಲೆಯಲ್ಲಿ ತಾಂತ್ರಿಕ ದೋಷವನ್ನು ಸರಿಪಡಿಸುವಂತೆ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರಿಗೆ ಈಗಾಗಲೇ ಪತ್ರ ಬರೆಯಲಾಗಿದೆ.<br><br>ಈ ಸಂಬಂಧ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರನ್ನು ಭೇಟಿ ಮಾಡಿ ತಾಂತ್ರಿಕ ಸಮಸ್ಯೆಗಳನ್ನು ನಿವಾರಿಸುವ ಬಗ್ಗೆ ಚರ್ಚಿಸಲಾಗಿ, ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ತಾಂತ್ರಿಕ ನ್ಯೂನತೆಗಳನ್ನು ನಿವಾರಿಸಬೇಕಾದಲ್ಲಿ, ತಂತ್ರಾಂಶವನ್ನು ಉನ್ನತೀಕರಿಸಬೇಕಿದ್ದು, ಈ ಪ್ರಕ್ರಿಯೆಗೆ ಸಮಯಾವಕಾಶದ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ.<br><br>ಆದ್ದರಿಂದ ಹೆಚ್.ಆರ್.ಎಮ್.ಎಸ್. ಸೆಲ್ ವತಿಯಿಂದ ತಾಂತ್ರಿಕದೋಷ ಬಗೆಹರಿಯುವವರೆಗೆ ತಾತ್ಕಾಲಿಕವಾಗಿ ದೃಢೀಕೃತ ದಾಖಲೆಗಳ (Manual Documents) ಆಧಾರದ ಮೇಲೆ ಸಂಘದ ಸಿಬ್ಬಂದಿಗಳಿಗೆ ಯೋಜನೆಯನ್ನು ಪ್ರಾರಂಭಿಸಲು ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಪತ್ರದ ಮೂಲಕ ಕೋರಲಾಗಿರುತ್ತದೆ.<br><br>ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಸಂಘದ ಖಾಯಂ ನೌಕರರು & ಅವರ ಅವಲಂಬಿತರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ತಾತ್ಕಾಲಿಕವಾಗಿ ದೃಢೀಕೃತ ದಾಖಲೆಗಳ (Manual Documents) ಆಧಾರದ ಮೇಲೆ ವಿಸ್ತರಿಸಲು ಅನುಮೋದನೆ ನೀಡಿದ ನಂತರ, ಸಂಘದ ಖಾಯಂ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮುಂದಿನ ಕ್ರಮವಹಿಸಲಾಗುವುದು.<br><br>**ಹೆಚ್ಚುವರಿ ವೇತನ ಬಡ್ತಿ**<br><br>ಶ್ರೀ ಕುಮಾರ್ ನಾಯಕ್ ಸಮಿತಿಯ ಶಿಫಾರಸ್ಸಿನಂತೆ ಶಿಕ್ಷಣ ಇಲಾಖೆಯ ಶಿಕ್ಷಕರುಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಿರುವಂತೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ 01.06.2016 ರಿಂದ ಅನ್ವಯವಾಗುವಂತೆ ಮಂಜೂರು ಮಾಡುವಂತೆ ಕೋರಲಾಗಿದ್ದು, ಸರ್ಕಾರದ ಹಿಂಬರಹ ಸಂಖ್ಯೆ ಸಕಇ 144 ಮೊದೇಶಾ 2017 ದಿನಾಂಕ 19.11.2018 ಮತ್ತು ಸರ್ಕಾರದ ಪತ್ರ ಸಂಖ್ಯೆ ಸಕಇ 144 ಮೊದೇಶಾ 2017, ದಿನಾಂಕ 27.08.2019 ರಲ್ಲಿ ಸಂಘದ ಬೋಧಕ ಸಿಬ್ಬಂದಿಗಳಿಗೆ ಒಂದು ಹೆಚ್ಚುವರಿ |

| | | |
|---|---|---|
| | | ವೇತನ ಬಡ್ತಿಯನ್ನು ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ತಿಳಿಸಲಾಗಿರುತ್ತದೆ.<br>ಮುಂದುವರೆದು, ಸಂಘದ ವ್ಯಾಪ್ತಿಯ ಖಾಯಂ ನೌಕರರುಗಳಿಗೆ ಇತರೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವಂತೆ ವೈದ್ಯಕೀಯ ವೆಚ್ಚ ಮರುಪಾವತಿ, ಮೃತಪಟ್ಟ ಖಾಯಂ ನೌಕರರ ಕುಟುಂಬದ ಸದ್ಯಸ್ಯರಿಗೆ ಅನುಕಂಪ ಆಧಾರದ ಮೇಲೆ ನಿಯಮಾನುಸಾರ ನೌಕರಿ ಹಾಗೂ ದಿನಾಂಕ:01.08.2016 ರಿಂದ ಅನ್ವಯವಾಗುವಂತೆ ವಾರ್ಷಿಕ ಗುಂಪು ವಿಮೆ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ಈವರೆಗೆ ಅರ್ಹರಿರುವ 23 ಮೃತರ ಕುಟುಂಬಕ್ಕೆ ಈ ಸೌಲಭ್ಯ ನೀಡಲಾಗಿರುತ್ತದೆ. |

ಸಂಖ್ಯೆ: ಸಕಇ 546 ಮೊದೇಶಾ 2021

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಶ್ರೀ. ಮರಿತಿಬ್ಬೇಗೌಡ.(ಶಿಕ್ಷಕರ ಕ್ಷೇತ್ರ) ವಿಧಾನ ಪರಿಷತ್ತಿನ ಸದಸ್ಯರು, ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 527(636)ಕ್ಕೆ | | |
|---|---|---|
| ಅನುಬಂಧ- 1 | | |
| ಕ್ರ.ಸಂ | ಜಿಲ್ಲೆ | ಒಟ್ಟು |
| 1 | ಬಾಗಲಕೋಟೆ | 30 |
| 2 | ಬೆಳಗಾವಿ | 54 |
| 3 | ಬಳ್ಳಾರಿ | 44 |
| 4 | ಬೆಂಗಳೂರು ನಗರ | 5 |
| 5 | ಬೆಂಗಳೂರು ಗ್ರಾಮೀಣ | 12 |
| 6 | ಬೀದರ್ | 29 |
| 7 | ಚಾಮರಾಜನಗರ | 22 |
| 8 | ಚಿಕ್ಕಬಳ್ಳಾಪುರ | 22 |
| 9 | ಚಿಕ್ಕಮಗಳೂರು | 35 |
| 10 | ಚಿತ್ರದುರ್ಗ | 36 |
| 11 | ದಕ್ಷಿಣ ಕನ್ನಡ | 11 |
| 12 | ದಾವಣಗೆರೆ | 23 |
| 13 | ಧಾರವಾಡ | 15 |
| 14 | ಗದಗ | 16 |
| 15 | ಹಾಸನ | 38 |
| 16 | ಹಾವೇರಿ | 28 |
| 17 | ಕಲಬುರ್ಗಿ | 45 |
| 18 | ಕೊಡಗು | 9 |
| 19 | ಕೋಲಾರ | 26 |
| 20 | ಕೊಪ್ಪಳ | 29 |
| 21 | ಮಂಡ್ಯ | 38 |
| 22 | ಮೈಸೂರು | 37 |
| 23 | ರಾಯಚೂರು | 36 |
| 24 | ರಾಮನಗರ | 23 |
| 25 | ಶಿವಮೊಗ್ಗ | 32 |
| 26 | ತುಮಕೂರು | 53 |
| 27 | ಉಡುಪಿ | 9 |
| 28 | ಉತ್ತರ ಕನ್ನಡ | 24 |
| 29 | ವಿಜಯಪುರ | 23 |
| 30 | ಯಾದಗಿರಿ | 22 |
| | **ಒಟ್ಟು** | **826** |